





(ಅವತೀರ್ಣ - ಮದೀನಾದಲ್ಲಿ)

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. ಗ್ರಂಥದವರು ಮತ್ತು ಬಹುದೇವಾರಾಧಕರ ಪೈಕಿ ಸತ್ಯನಿಷೇಧಿಗಳಾಗಿದ್ದವರು (ತಮ್ಮ ನಿಷೇಧ ನೀತಿಯಿಂದ) ಹಿಂಜರಿಯುವವರಾಗಿರಲಿಲ್ಲ- ಅವರ ಬಳಿಗೆ ಸುವ್ಯಕ್ತ ಪುರಾವೆಯು ಬಂದು ಬಿಡುವ ವರೆಗೆ-

لَمْ يَكُنِ الَّذِيْنَ كَفَرُوْا مِنْ اَهْلِ
الْكِتٰبِ وَالْمُشْرِكِيْنَ مُنْفَكِّيْنَ حَتّٰى
تَاْتِيَهُمُ الْبَيِّنَةُ ①

2-3. (ಅಂದರೆ) ಅಲ್ಲಾಹನ ವತಿಯಿಂದ, ನೇರವಾದ ಹಾಗೂ ಸರಿಯಾದ ಬರಹಗಳುಳ್ಳ[1] ಪಾವನ ಗ್ರಂಥಗಳನ್ನು ಓದಿ ಹೇಳುವ ಸಂದೇಶ ವಾಹಕನು[2] ಬರುವವರೆಗೆ.

رَسُوْلٌ مِّنَ اللّٰهِ يَتْلُوْا صُحُفًا مُّطَهَّرَةً ②
فِيْهَا كُتُبٌ قَيِّمَةٌ ③

4. ಈ ಹಿಂದೆ ಗ್ರಂಥ ನೀಡಲ್ಪಟ್ಟಿದ್ದವರಲ್ಲಿ ಒಡಕುಂಟಾದುದು ಅವರ ಬಳಿಗೆ (ಸನ್ಮಾರ್ಗದ) ಸುಸ್ಪಷ್ಟ ಆದೇಶ ಬಂದ ಬಳಿಕವಷ್ಟೇ.[3]

وَمَا تَفَرَّقَ الَّذِيْنَ اُوْتُوا الْكِتٰبَ اِلَّا
مِنْۢ بَعْدِ مَا جَآءَتْهُمُ الْبَيِّنَةُ ④

5. ಅವರಿಗೆ ನೀಡಲಾಗಿದ್ದ ಆದೇಶವು- ಅವರು ತಮ್ಮ ಧರ್ಮವನ್ನು ನಿಷ್ಕಳಂಕವಾಗಿ ಅಲ್ಲಾಹನಿಗೆ ಮಾತ್ರ ಮೀಸಲಾಗಿಟ್ಟು, ಏಕನಿಷ್ಠೆಯಿಂದ ಅಲ್ಲಾಹನ ದಾಸ್ಯ ಮಾಡಬೇಕು, ನಮಾಝನ್ನು ಸಂಸ್ಥಾಪಿಸಬೇಕು ಮತ್ತು ಝಕಾತನ್ನು ನೀಡಬೇಕು - ಎಂಬುದರ ಹೊರತು ಬೇರೇನೂ ಆಗಿರಲಿಲ್ಲ. ಇದುವೇ ಅತ್ಯಂತ ಸರಿಯಾದ ಧರ್ಮ.

وَمَآ اُمِرُوْٓا اِلَّا لِيَعْبُدُوا اللّٰهَ مُخْلِصِيْنَ
لَهُ الدِّيْنَ ۙ حُنَفَآءَ وَيُقِيْمُوا الصَّلٰوةَ
وَيُؤْتُوا الزَّكٰوةَ وَذٰلِكَ دِيْنُ الْقَيِّمَةِ ⑤

6. ಗ್ರಂಥದವರು ಹಾಗೂ ಬಹುದೇವಾರಾಧಕರ ಪೈಕಿ ಸತ್ಯನಿಷೇಧಿ

اِنَّ الَّذِيْنَ كَفَرُوْا مِنْ اَهْلِ الْكِتٰبِ

1. ಅರ್ಥಾತ್- ಯಾವುದೇ ರೀತಿಯ ಮಿಥ್ಯೆ, ಪಥಭ್ರಷ್ಟತೆ, ಅಂಧಕಾರ ಮತ್ತು ನೈತಿಕ ಮಾಲಿನ್ಯಗಳ ಸೇರ್ಪಡೆಯಿಲ್ಲದಂತಹ ಗ್ರಂಥಗಳು.
2. ಇಲ್ಲಿ ಸ್ವತಃ ಪ್ರವಾದಿವರ್ಯರನ್ನೇ(ಸ) ಸುವ್ಯಕ್ತವಾದ ಒಂದು ಪುರಾವೆಯೆನ್ನಲಾಗಿದೆ.
3. ಅರ್ಥಾತ್- ಇದಕ್ಕೆ ಮೊದಲು ಗ್ರಂಥ ಕೊಡಲ್ಪಟ್ಟವರು ಅನೇಕ ರೀತಿಯ ಪಥಭ್ರಷ್ಟತೆಯಲ್ಲಿ ಸಿಲುಕಿ ವಿವಿಧ ಪಂಗಡಗಳಾಗಿ ಒಡೆದು ಹೋಗಲು ಕಾರಣ, ಅವರ ಮಾರ್ಗದರ್ಶನಕ್ಕಾಗಿ ಅಲ್ಲಾಹನ ವತಿಯಿಂದ ಸುವ್ಯಕ್ತ ಪುರಾವೆಗಳನ್ನು ಕಳುಹಿಸಲು ಯಾವುದೇ ಲೋಪ ಸಂಭವಿಸಿರುವುದಲ್ಲ. ಅಲ್ಲಾಹನ ವತಿಯಿಂದ ಮಾರ್ಗದರ್ಶನಗಳು ಬಂದ ನಂತರವೇ ಅವರು ಈ ನಿಲುವನ್ನು ತಳೆದಿದ್ದರು. ಆದ್ದರಿಂದ ಅವರ ಪಥಭ್ರಷ್ಟತೆಗೆ ಅವರೇ ಹೊಣೆಗಾರರು.

ಗಳಾಗಿರುವವರು[4] ಖಂಡಿತವಾಗಿಯೂ ನರಕಾಗ್ನಿಯಲ್ಲಿ ಬೀಳುವರು ಮತ್ತು ಸದಾಕಾಲ ಅದರಲ್ಲಿರುವರು. ಇವರು ಅತ್ಯಂತ ನಿಕೃಷ್ಟ ಸೃಷ್ಟಿಗಳು.

وَالْمُشْرِكِيْنَ فِيْ نَارِ جَهَنَّمَ خٰلِدِيْنَ
فِيْهَا ۭ اُولٰۗىِٕكَ هُمْ شَرُّ الْبَرِيَّةِ ۝۶

7. ಸತ್ಯವಿಶ್ವಾಸ ಸ್ವೀಕರಿಸಿದವರೂ ಸತ್ಕರ್ಮ ಮಾಡಿದವರೂ ಅತ್ಯುತ್ತಮ ಸೃಷ್ಟಿಗಳು.

اِنَّ الَّذِيْنَ اٰمَنُوْا وَعَمِلُوا الصّٰلِحٰتِ ۙ
اُولٰۗىِٕكَ هُمْ خَيْرُ الْبَرِيَّةِ ۝۷

8. ಅವರ ಪ್ರತಿಫಲ ಅವರ ಪ್ರಭುವಿನ ಬಳಿ ಶಾಶ್ವತ ನಿವಾಸದ ಸ್ವರ್ಗೋದ್ಯಾನಗಳಾಗಿವೆ. ಅವುಗಳ ತಳಭಾಗದಲ್ಲಿ ಕಾಲುವೆಗಳು ಹರಿಯುತ್ತಿರುವುವು. ಅವರು ಅವುಗಳಲ್ಲಿ ಸದಾಕಾಲ ವಾಸಿಸುವರು. ಅಲ್ಲಾಹ್ ಅವರಿಂದ ಸಂಪ್ರೀತನಾದನು ಮತ್ತು ಅವರು ಅಲ್ಲಾಹನಿಂದ ಸಂಪ್ರೀತರಾದರು. ತನ್ನ ಪ್ರಭುವನ್ನು ಭಯ ಪಟ್ಟವನಿಗೆ ಇದೆಲ್ಲವೂ ಇದೆ.

جَزَاۗؤُهُمْ عِنْدَ رَبِّهِمْ جَنّٰتُ عَدْنٍ
تَجْرِيْ مِنْ تَحْتِهَا الْاَنْهٰرُ خٰلِدِيْنَ
فِيْهَآ اَبَدًا ۭ رَضِيَ اللّٰهُ عَنْهُمْ وَرَضُوْا
عَنْهُ ۭ ذٰلِكَ لِمَنْ خَشِيَ رَبَّهٗ ۝۸ ع

---

4. ಇಲ್ಲಿ ಸತ್ಯನಿಷೇಧವೆಂದರೆ ಪ್ರವಾದಿವರ್ಯರನ್ನು(ಸ) ನಿಷೇಧಿಸುವುದಾಗಿದೆ.